# ಮುಂಜಾವು

ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

MUNJAVU' Kannada Weekly, KOPPA-CHM. ಫೋನ್ : 114
8ನೇ ವರ್ಷ 32ನೇ ಸಂಚಿಕೆ ಕೊಪ್ಪ 15-4-1990 ಭಾನುವಾರ ಬೆಲೆ 60 ಪೈಸೆ


## ಬಿ. ಜಿ. ಕಟ್ಟೆ-ಅಗಳಗಂಡಿ ರಸ್ತೆಗೆ ಪೂರ್ತಿ ಟಾರ್ ಹಾಕಿಸಲು ಒತ್ತಾಯ

ಬೆಳವಿನಕೊಡಿಗೆ : ಬಿ. ಜಿ. ಕಟ್ಟೆ-ಅಗಳಗಂಡಿ ನಡುವಿನ 10 ಕಿ. ಮೀ. ರಸ್ತೆಯಲ್ಲಿ ಈವರೆಗೆ 6.5 ಕಿ. ಮೀ. ಟಾರು ಆಗಿದೆ. ಇದು ಲೋಕೋಪಯೋಗಿ ಇಲಾಖೆಗೆ ಸೇರಿದ ರಸ್ತೆಯಾಗಿದ್ದು, ಕೊಪ್ಪ ತಾ|| ನಲ್ಲಿ ಇದಲ್ಲದೆ ಇಲಾಖೆಯ ಅಧೀನದಲ್ಲಿ ಬೇರೆ ರಸ್ತೆಗಳಿಲ್ಲ.

ಈ ಮಾರ್ಗದಲ್ಲಿ ಈಗಾಗಲೇ 6 ಬಸ್ಸುಗಳು ಓಡಾಡುತ್ತಿದ್ದು, ಇನ್ನೂ 3 ಬಸ್ಸುಗಳಿಗೆ ಪರ್ಮಿಟ್ ಆಗುವ ಹಂತದಲ್ಲಿದೆ. ಇದರಿಂದಲೇ ಈ ಮಾರ್ಗದ ಉಪಯುಕ್ತತೆ ಎಷ್ಟೆಂಬುದನ್ನು ಅರಿಯಬಹುದು.

ಆದ್ದರಿಂದ ಇಲಾಖೆಯವರು ಕೂಡಲೇ ಈ ಮಾರ್ಗಕ್ಕೆ ಪೂರ್ತಿಯಾಗಿ ಟಾರ್ ಹಾಕಿಸಬೇಕು ಎಂದು ತುಳುವಿನಕೊಪ್ಪ ಮಂಡಲ ಸದಸ್ಯ ಬಿ. ಕೆ. ರಮೇಶ್ ಒತ್ತಾಯಿಸಿದ್ದಾರೆ.

ಈ ಹಿಂದೆಯೇ ಇಲ್ಲಿ ಟಾರ್ ಹಾಕಿಸಲೆಂದು ಸಂಗ್ರಹಿಸಿದ್ದ ಜಲ್ಲಿಯನ್ನೂ ಬೇರೆಡೆಗೆ ಸಾಗಿಸಿ, ಕೇವಲ ರಾಜಕೀಯ ಕಾರಣಕ್ಕೆ ಈ ಮಾರ್ಗ ತಪ್ಪಲಿಯುಂಟಾದುದನ್ನು ರಮೇಶ್ ಜೊತೆಗೆ ಇತರ ಗ್ರಾಮಸ್ಥರೂ ಬಹಳ ವಿಷಾದದಿಂದ ನೆನೆಯುತ್ತಾರೆ.

# ರಾಷ್ಟ್ರ ನಾಯಕ ಅಂಬೇಡ್ಕರ್‌ಗೆ ನಮನ

ಕೊಪ್ಪ : ಸಂವಿಧಾನ ಶಿಲ್ಪಿ, ರಾಷ್ಟ್ರ ನಾಯಕ, ಭಾರತ ರತ್ನ ಡಾ|| ಅಂಬೇಡ್ಕರ್ ಅವರ ಜನ್ಮ ಶತಾಬ್ದಿ ಆಚರಣೆ ಮತ್ತು ಬಾಬು ಜಗಜೀವನರಾಂ ಅವರ 83 ನೇ ಹುಟ್ಟು ಹಬ್ಬದ ಸಮಾರಂಭ ಶಾಸಕ ಶಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮುಖ್ಯ ಭಾಷಣಕಾರರಾಗಿ ಮಾತನಾಡಿದ ಕಿರಿಯ ಕಾಲೇಜು ಉಪನ್ಯಾಸಕ ಶ್ರೀನಿವಾಸ್, ಸರ್ಕಾರ ದಲಿತರಿಗೆ 10 ಸಾವಿರ ರೂ. ಕೊಟ್ಟರೆ 9 ಸಾವಿರ ವಾಪಸು ಪಡೆಯುತ್ತದೆ; ದಲಿತರಿಗೆ ಒಂದು ಕೈಗೆ ಬರೆ ಕೊಟ್ಟರೆ ಒಂದು ಕೈಗೆ ಬಾಚ್ಲು ಕಟ್ಟಿದ್ದೀರಿ ಎಂದು ಸರ್ಕಾರವನ್ನು ಟೀಕಿಸಿ, ಅಂಬೇಡ್ಕರ್ ಅನುಭವಿಸಿದಂಥ ಸಾಮಾಜಿಕ ಪರಿಸ್ಥಿತಿ ಇನ್ನೂ ಬದಲಾಗಿಲ್ಲ ಎಂದರು. ಅಂಬೇಡ್ಕರ್ ಜೀವನ-ಸಾಧನೆಗಳನ್ನು ಅವರು ವಿವರವಾಗಿ ಪರಿಚಯಿಸಿದರು.

ಸಿರಿಮನೆ ನಾಗರಾಜ್ ಮಾತನಾಡುತ್ತ, ಕೇವಲ ಸರ್ಕಾರಿ ಆದೇಶಕ್ಕಾಗಿ ಮಾತ್ರ ನಡೆಯುವ ಇಂಥ ಬೂಟಾಟಿಕೆಯ ಕಾರ್ಯಕ್ರಮ ನಿಜವಾಗಿ ಅಂಬೇಡ್ಕರ್ ಸ್ಮರಣೆಯಲ್ಲ ಎಂದು ಕಟುವಾಗಿ ಹೇಳಿದರು.

ಅಂಬೇಡ್ಕರ್‌ರವರು ಗಾಂಧೀಜಿಯೊಡನೆ, "ನನಗೆ, ನನ್ನ ಜನರಿಗೆ ಸ್ವಾತಂತ್ರ್ಯಕ್ಕೆ ಅರ್ಥವೆಲ್ಲಿದೆ?" ಎಂದು ಪ್ರಶ್ನಿಸಿದಂತೆ ಇಂದಿನ ಎಚ್ಚೆತ್ತ ದಲಿತರೂ "ಯಾರಿಗೆ ಬಂತು 47 ರ ಸ್ವಾತಂತ್ರ್ಯ?" ಎಂದು ಕೇಳುತ್ತಿದ್ದಾರೆ. ಅಂದು ಅಂಬೇಡ್ಕರ್ ಹಿಂದೂ ಧರ್ಮದ ಅಸಮಾನತೆ, ತುಳಿತಗಳಿಂದ ಹೇಸಿ-ರೋಸಿ, "ಹುಟ್ಟುವುದಂತೂ ನನ್ನ ಕೈಯಲ್ಲಿರಲಿಲ್ಲ-ಹಿಂದುವಾಗಿ ಹುಟ್ಟಿದೆ. ಆದರೆ ಹಿಂದುವಾಗಿ ಖಂಡಿತ ಸಾಯಲಾರೆ" ಎಂದು ಬೌದ್ಧ ಧರ್ಮ ಸ್ವೀಕರಿಸಿದಂತೆ, ಇಂದು ಪ್ರಜ್ಞಾವಂತ ದಲಿತರು ತಮ್ಮನ್ನು ಹಿಂದು ಎನ್ನುವುದನ್ನು ಸಹಿಸುವುದಿಲ್ಲ, ಮಾತ್ರವಲ್ಲ, ಮತಾಂತರವನ್ನೂ ಹೊಂದುತ್ತಿದ್ದಾರೆ, ಆದರೆ ಅಂಬೇಡ್ಕರ್ ಎದುರಿಸಿದಂಥದೇ ಸವರ್ಣೀಯರ ಮನಃಸ್ಥಿತಿಯನ್ನು ಇಂದೂ ಅವರು ಕಾಣುತ್ತಿದ್ದಾರೆಂದೇ ಅರ್ಥ ಎಂದು ವಿವರಿಸಿದರು

ಭಾರತೀಯರಿಗೆ ಬ್ರಿಟಿಷ್ ಸರ್ಕಾರದಲ್ಲಿ ಉದ್ಯೋಗಗಳ ಮೀಸಲಾತಿಯ ಬೇಡಿಕೆಯೇ 1884ರ ಕಾಂಗ್ರೆಸ್ ಹುಟ್ಟಿಗೆ ಮೂಲ; ಸ್ವಾತಂತ್ರ್ಯದ ಬೇಡಿಕೆ ಅನಂತರದ್ದು. ದಲಿತರಿಗೆ, ಇತರ ಹಿಂದುಳಿದವರಿಗೆ ಅವರ ಸಂಖ್ಯೆಯ ಪ್ರಮಾಣದಲ್ಲಿ ಮಾತ್ರ ಮೀಸಲಾತಿ ಕೊಡಲಾಗುತ್ತಿದೆ. ಕ್ಯಾಪಿಟೇಶನ್‌ನಿಂದ ಡಾಕ್ಟರ್, ಇಂಜಿನಿಯರ್ ಆದವರಿಗಿಂತ ಕಡೇ ಪಕ್ಷ ಶೇ. 35 ಅಂಕವನ್ನಾದರೂ ತೆಗೆಯಬಲ್ಲ ದಲಿತ ಕಡಿಮೆ ಅಪಾಯಕಾರಿಯಲ್ಲವೆ ? ಎಂದು ಪ್ರಶ್ನಿಸಿದರು.

ಮೀಸಲಾತಿ ಒಂದು ಕುಟುಂಬದೊಳಗಿನ ಅಶಕ್ತ ಸದಸ್ಯನಿಗೆ ಉಳಿದವರು ಮಾಡುವ ತ್ಯಾಗದಂತೆ ನಮ್ಮ ಸಮಾಜದ ಜವಾಬ್ದಾರಿ ಎಂಬುದನ್ನೂ, ಅಂಬೇಡ್ಕರ್ ಕೇವಲ ಒಂದು ಜನಾಂಗದ ನಾಯಕನಾಗಿರದೆ ಗಾಂಧೀಜಿಯವರಷ್ಟೇ ಸಮರ್ಥರಾದ, ಅಷ್ಟೇ ದೇಶಭಕ್ತರಾದ ರಾಷ್ಟ್ರ ನಾಯಕ ಎಂಬುದನ್ನೂ ಅರ್ಥಮಾಡಿಕೊಳ್ಳಲು ಎಂದಿನವರೆಗೆ ನಮ್ಮ ಮನಸ್ಸುಗಳಿಗೆ ಸಾಧ್ಯವಾಗುವುದಿಲ್ಲವೋ, ಅಲ್ಲಿಯವರೆಗೆ ಈ ದೇಶಕ್ಕೆ ನಿಜವಾದ ಅರ್ಥದಲ್ಲಿ ಏಳಿಗೆಯಿಲ್ಲ ಎಂದು ಅವರು ಹೇಳಿದರು.

ಸುಮಿತ್ರಮ್ಮ ಮತ್ತು ಡಿ.ಎಸ್. ವಿಶ್ವನಾಥ ಶೆಟ್ಟಿ ಅವರುಗಳೂ ಮಾತನಾಡಿದರು. ಶಾಸಕ ಶಾಮಣ್ಣ ಮಾತನಾಡಿ, ಮೀಸಲಾತಿಯನ್ನು 10 ವರ್ಷ ವಿಸ್ತರಿಸಲು ತಮ್ಮ ಸರ್ಕಾರ ಅನುಮತಿ ನೀಡಿದ್ದನ್ನೂ, ಇನ್ನೂ ಉಳಿದಿರಬಹುದಾದ ತಲೆಯ ಮೇಲೆ ಮಲ ಹೊರುವ ಪದ್ಧತಿ ಅಳಿಸಿ ಹಾಕುವ ನಿಟ್ಟಿನಲ್ಲಿ ವ್ಯಾಪಕ ಗ್ರಾಮ ನೈರ್ಮಲ್ಯದ ಕಾರ್ಯಕ್ರಮ ಕೈಗೊಂಡಿರುವುದನ್ನೂ ತಿಳಿಸಿ, ಜಗಜೀವನರಾಂ ಅವರ ಸರಳ ಜೀವನ ಹಾಗೂ ತಮ್ಮ ಕ್ಷೇತ್ರದ ಜನರ ಬಗ್ಗೆ ಅವರು ತೋರುತ್ತಿದ್ದ ಕಾಳಜಿಗಳನ್ನು ತಾವು ಕಣ್ಣಾರೆ ಕಂಡುದನ್ನು ವಿವರಿಸಿದರು.

ಬಿ.ಡಿ.ಓ. ರಾಮಮೂರ್ತಿ ಸ್ವಾಗತಿಸಿ, ರಂಗಸ್ವಾಮಿ ವಂದಿಸಿದರು.

## ಸಾಮೂಹಿಕ ವಿವಾಹ

ಬಾಳಗಡಿ ವಿದ್ಯಾ ಮಹಿಳಾ ಸಮಾಜ ಹಾಗೂ ಚೇತನ ಯುವತಿ ಮಂಡಳಿ ಇವರು ...8ರಂದು ಬಾಳಗಡಿಯಲ್ಲಿ ಏರ್ಪಡಿಸಿದ್ದ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಕೊಪ್ಪ ಸುತ್ತಮುತ್ತಲಿನ 10 ಜೋಡಿಗಳು ಪ್ರಯೋಜನ ಪಡೆದುಕೊಂಡರು.

ಈ ಸರಳ ವಿವಾಹ ಸಮಾರಂಭದಲ್ಲಿ ಶಾಸಕ ಯು.ಕೆ ಶಾಮಣ್ಣ, ನ.ರಾ. ಪುರದ ... ಲರಾದ ಶ್ರೀಮತಿ ಶಶಿಕಲಾ ಉರಣ್, ಕೊಪ್ಪ ಬಿಡಿಓ ರಾಮಮೂರ್ತಿ, ಕೊಪ್ಪ ತಹಸೀಲ್ದಾರ್ ಜಿ. ಎಸ್. ನಾ... ಹಾಗೂ ಸುಮಿತ್ರಮ್ಮ ಮುಂತಾದವರು ಹಾಜರಿದ್ದರು

## ಪೂರ್ವ ಸೂಚನೆ ಕೊಡದೆ ಏಲಕ್ಕಿ ವ್ಯಾಪಾರ ರದ್ದು : ಬೆಳೆಗಾರರಿಗೆ ತೊಂದರೆ

ಕೊಪ್ಪ : ಇಲ್ಲಿನ ಸಂಬಾರ ಮಂಡಳಿ ...ರಿಯಲ್ಲಿ ಏಲಕ್ಕಿ ಮಾರುಕಟ್ಟೆ ಮಂಡಳಿ ... ಏ. 7ರಂದು ವ್ಯಾಪಾರವಿರುವುದಾಗಿ ಪ್ರಚುರಪಡಿಸಿದ್ದು, ಅಂದು ತಾಲ್ಲೂಕಿನ ಎಲ್ಲೆಡೆಯಿಂದ ಸುಮಾರು 50 ಜನ ...ರರು ಎರಡೂವರೆ ಕ್ವಿಂಟಾಲ್‌ನಷ್ಟು ... ತಂದರು. ಅಪರಾಹ್ನದವರೆಗೂ ...ಬವಣೆ ಪಟ್ಟುಕೊಂಡು ಹೋದ ... ಬೆಳೆಗಾರರು ತಿಳಿಸಿದ್ದು, ಪೂರ್ವ ಸೂಚನೆಯಿಲ್ಲದೆ ವ್ಯಾಪಾರ ರದ್ದುಪಡಿಸಿದ ...ರಿಗಳ ಬೇಜವಾಬ್ದಾರಿಯನ್ನು ಖಂಡಿಸಿದ್ದಾರೆ.

## ಹೋಟೆಲ್‌ಗೆ ಪ್ರಶಸ್ತಿ

ಕೊಪ್ಪ : ಇಲ್ಲಿನ ಲಯನ್ಸ್ ಕ್ಲಬ್ ಪ್ರತಿ ವರ್ಷದಂತೆ 1989-90 ರ ಸಾಲಿಗೆ ನೀಡಿದ 'ಅತ್ಯಂತ ಶುಚಿಯಾದ ಹೋಟೆಲ್' ಪ್ರಶಸ್ತಿಯನ್ನು ಭಾರತ್ ಬೈಸ್‌ವಾಲ್ ರಸ್ತೆಯ ವಿನಾಯಕ ಕ್ಯಾಂಟೀನ್ ಮಾಲೀಕ ಎಚ್. ಎ. ಸುಂದರ್ ಗಳಿಸಿದ್ದಾರೆ. ಎರಡನೇ ಸ್ಥಾನ ಅನ್ನಪೂರ್ಣ ಹೋಟೆಲ್‌ಗೆ ದೊರೆತಿದ್ದು, ರೋಶನ್ ಹೋಟೆಲ್ ಮತ್ತು ತಿಲಕ್ ರಸ್ತೆ ಕ್ಯಾಂಟೀನ್ ಸಮಾಧಾನಕರ ಬಹುಮಾನ ಗಳಿಸಿವೆ.

ಕ್ಲಬ್‌ನ ವೈದ್ಯರುಗಳು ಪಟ್ಟಣದ ಎಲ್ಲ 38 ಹೋಟೆಲ್‌ಗಳಿಗೆ ಭೇಟಿ ನೀಡಿ ಪ್ರಶಸ್ತಿಗಳನ್ನು ನಿರ್ಣಯಿಸಿದರು. ಅಲ್ಲದೆ, ಆ ಎಲ್ಲ ಹೋಟೆಲ್‌ಗಳ ಕ್ಲೀನರ್‌ಗಳಿಗೆ ಕೈ ಬೆರಳು ಹುಣ್ಣು ಹಾಗೂ ಹೊಟ್ಟೆ ಹುಳುವಿನ ಔಷಧಿಗಳನ್ನೂ (ಸುಮಾರು 1200 ರೂ.) ವಿತರಿಸಲಾಯಿತು.

## ದಾಸಮಠದ ರಥೋತ್ಸವ

ಕೊಪ್ಪ: ಇಲ್ಲಿನ ದಾಸಮಠದ ರಥೋತ್ಸವ ಏ. 20ರಂದು ಮಧ್ಯಾಹ್ನ 12 ಗಂಟೆಗೆ ನಡೆಯುವುದೆಂದು ವ್ಯವಸ್ಥಾಪಕರು ತಿಳಿಸಿದ್ದಾರೆ.

# ಹಳ್ಳಿಗಾಡಿನ ಹಲವು-ಹತ್ತು ಸಮಸ್ಯೆಗಳು

### ಮೇಲ್ಪಾಲು

1) ಈ ಗ್ರಾಮಕ್ಕೆ ಸಂಜೆ 6-7 ಗಂಟೆಯ ನಂತರ ವಿದ್ಯುತ್ತಿನ ಖಾತರಿ ಇಲ್ಲ. ಕೆಲವು ಸಲ ಹೋದದ್ದು ಹೋಗಿಯೇ ಬಿಡುತ್ತೆ. ಸಿಬ್ಬಂದಿ ವರ್ಗದವರನ್ನು ಕೇಳಿದರೆ "ಅಲ್ಲಿ ಟ್ರಿಪ್ ಆಯ್ತು, ಇಲ್ಲಿ ಟ್ರಿಪ್ ಆಯ್ತು" ಎನ್ನುತ್ತಾರೆ. ಬಾಳೆಹೊನ್ನೂರು ಉಪ ವಿಭಾಗ ಕೇಂದ್ರಕ್ಕೆ ಇಷ್ಟು ಸಮೀಪದಲ್ಲಿರುವ ಇಲ್ಲಿಯೇ ಇಷ್ಟೊಂದು ಅವ್ಯವಸ್ಥೆ ಎನ್ನುತ್ತಾರೆ ನೊಂದ ಗ್ರಾಮಸ್ಥರು.

2) ಇಲ್ಲಿಂದ ಕೊಪ್ಪ-ಬಾಳೆಹೊನ್ನೂರು ಈ ಎರಡು ಕಡೆಯ ರಸ್ತೆಯೂ ತೀರಾ ದುಃಸ್ಥಿತಿಯಲ್ಲಿದೆ. ಬಿಳಾಲ್ ಕೊಪ್ಪ-ಬಸರಿಕಟ್ಟೆ ರಸ್ತೆಯ ಕಥೆಯಂತೆಯೇ ಇಲ್ಲೂ ಸಹ ಕೆಲವು ಭಾಗ ಟಾರ್ ಆಗಿರುವುದರ ಗುರುತೇ ಸಿಗುವುದಿಲ್ಲ. ಬಾಳೆಹೊನ್ನೂರು ಕಡೆಗೆ ಅದೂ ಆಗಿಲ್ಲ. ಹತ್ತಾರು ಚಿಕ್ಕಪುಟ್ಟ ಹಳ್ಳಿಗಳ ಕೇಂದ್ರವಾದ ಇಲ್ಲಿಗೆ ಒಂದು ಒಳ್ಳೆಯ ರಸ್ತೆ ಸಂಪರ್ಕದ ಸೌಕರ್ಯ ಬೇಕು ಎನ್ನುತ್ತಾರೆ ರಸ್ತೆ ಬಳಕೆದಾರ ನಾಗರಿಕರು.

### ಅರೂರು, ಕೊಪ್ಪ ತಾ||

1) ಕೊಪ್ಪದಿಂದ ಕಳಸಾಪುರಕ್ಕೆ ದಿನಕ್ಕೆ ಕನಿಷ್ಠ 2 ಬಾರಿಯಾದರೂ ಬಸ್ ಸೌಕರ್ಯ ಕಲ್ಪಿಸಲು ಗ್ರಾಮಸ್ಥರು ಒತ್ತಾಯಿಸಿದ್ದಾರೆ. ಇದೇ ರಸ್ತೆ ಮುಂದೆ ಕಲ್ಕೆರೆಗೆ ಸೇರುವುದಿದ್ದು, ಅದನ್ನೂ ದುರಸ್ತಿ ಮಾಡಿದರೆ ಒಂದು ಒಳ್ಳೆಯ ಸಂಪರ್ಕ ರಸ್ತೆಯಾಗುತ್ತದೆ ಎನ್ನುತ್ತಾರೆ.

2) ವೃದ್ಧಾಪ್ಯ ವೇತನ, ಅಂಗವಿಕಲ ವೇತನ ಇತ್ಯಾದಿಗಳು ಇತ್ತೀಚೆಗೆ 4-5 ತಿಂಗಳು ಇಲ್ಲವಾಗುತ್ತಿವೆ. ಅರೂರಿನ ಒಬ್ಬ ಕೂಲಿಕಾರ್ತಿ ವೃದ್ಧೆಗೆ 8 ತಿಂಗಳಿಂದ ವೃದ್ಧಾಪ್ಯವೇತನ ಬಂದಿಲ್ಲ. ಹೀಗೆ, ಇದನ್ನೇ ನೆಚ್ಚಿರುವ ಹಳ್ಳಿಗಾಡಿನ ಬಡವರು ಅಸಂಖ್ಯರಾಗಿದ್ದಾರೆ. ಈ ವೇತನಗಳು ಹೀಗೆ ಪದೇ ಪದೇ ತಿಂಗಳುಗಟ್ಟಲೆ ನಿಂತುಬಿಟ್ಟರೆ ಅವರುಗಳ ಗತಿಯೇನು? ಎಂದು ನೊಂದವರ ಅಳಲು.

# ಇನ್ನಾದರೂ ನಾಟಕಗಳ ಪರಿಕಲ್ಪನೆ ಬದಲಾದೀತೆ ?

ಈಚೆಗೆ ಶೃಂಗೇರಿಯಲ್ಲಿ 'ನೀನಾಸಂ'ರವರಿಂದ ಪ್ರದರ್ಶಿತವಾದ ಉತ್ತಮ ನಾಟಕಗಳು ಈ ಮಲೆನಾಡ ಮೂಲೆಯ ನಾಟಕಪ್ರಿಯರಿಗೆ ನಾಟಕದ ಅದ್ಭುತ ಸಾಧ್ಯತೆಗಳನ್ನು ತೋರಿಸಿರಬಹುದು. ರಂಗಭೂಮಿಯ ಸಂಪೂರ್ಣ ಪರಿಚಯ ಮಾಡಿಕೊಡುವ ಇಂತಹ ನಾಟಕಗಳು ಶೃಂಗೇರಿಯಲ್ಲಿ ಪ್ರದರ್ಶಿತವಾದದ್ದು ಇದೇ ಮೊದಲೆನ್ನಬಹುದು.

ಪರದೆ ಮತ್ತು 'ಪಕಪಕ ಕುಣಿಸುವ ಬೆಳಕು' ಮಾತ್ರವೇ ರಂಗಸಜ್ಜಿಕೆ ಎಂದು ತಿಳಿದವರಿಗೆ; ಮಾತು ಒಪ್ಪಿಸುವುದು ಮಾತ್ರವೇ ಅಭಿನಯ ಎಂದುಕೊಂಡಿದ್ದ ನಟ ನಟಿಯರಿಗೆ; ಅಶ್ಲೀಲತೆ ಮತ್ತು ಹಾಸ್ಯಗಳ ನಡುವಿನ ವ್ಯತ್ಯಾಸ ತಿಳಿಯದೆ ಪ್ರೇಕ್ಷಕರ ಮೆಚ್ಚುಗೆ ಗಳಿಸಲು ಅಶ್ಲೀಲ ಹಾಸ್ಯವೊಂದೇ ದಾರಿ ಎಂದು ತಿಳಿದಿದ್ದ ನಿರ್ದೇಶಕ ಮಹನೀಯರುಗಳಿಗೆ — ಈಗಲಾದರೂ "ಕಲಿಯಬೇಕಾದ್ದು ಬಹಳಷ್ಟಿದೆ" ಎಂದು ಮನವರಿಕೆಯಾದರೆ ಶೃಂಗೇರಿಯ ರಂಗಭೂಮಿಗೆ ಹೊಸ ಚಾಲನೆ ಸಿಕ್ಕಂತಾಗಬಹುದು.

ನಾಟಕಗಳು ಈ ಸಮಾಜದ ಮೇಲೆ ಪರಿಣಾಮ ಬೀರುವಂತಹ ಒಂದು ಸಂವಹನ ಮಾಧ್ಯಮ. ಕೇವಲ ಮನರಂಜನೆಯನ್ನೊದಗಿಸುವುದಾಗಲಿ, ಕಣ್ಣೆದುರಿನ ವಾಸ್ತವವನ್ನು ಮಾತ್ರವೇ ಪ್ರತಿಬಿಂಬಿಸುವುದರಿಂದಲಾಗಲಿ ನಾಟಕ ಎನ್ನಿಸಿಕೊಳ್ಳುವುದಿಲ್ಲ. ಒಳ್ಳೆಯ ನಾಟಕಗಳು ಉತ್ತಮ ಪರಿಣಾಮ ಬೀರುವಂತೆಯೇ, ಕೆಟ್ಟ ನಾಟಕಗಳು ಕೆಟ್ಟ ಪರಿಣಾಮವನ್ನೂ ಬೀರಬಲ್ಲವು. ನಾಟಕಕಾರರು, ನಿರ್ದೇಶಕರು, ಕಲಾವಿದರು-ಎಲ್ಲರೂ ಈ ಅಂಶ ಗಮನದಲ್ಲಿರಿಸಿಕೊಳ್ಳುವುದು ಅವಶ್ಯಕ.

ಶಾಲಾ-ಕಾಲೇಜುಗಳು, ಸಂಘ-ಸಂಸ್ಥೆಗಳು ಮತ್ತು ವೈಯಕ್ತಿಕ ನಾಟಕಗಳ ಪ್ರದರ್ಶನದ ಕೆವಲಿಗೆ [illegible]ತ್ತಿರುವ ಕಲಾ ರಂಗದಂತಹ ಸಾಂಸ್ಕೃತಿಕ ಸಂಸ್ಥೆಗಳು, ಕನ್ನಡದ ಅತ್ಯುತ್ತಮ ನಾಟಕಕಾರರ ನಾಟಕಗಳನ್ನು ಪ್ರಯೋಗಿಸುವುದು ಸ್ಥಳೀಯ ರಂಗಭೂಮಿ ಗಟ್ಟಿಗೊಳ್ಳುವುದಕ್ಕೆ ಸಹಕಾರಿಯಾಗುತ್ತದೆ. 'ನೀನಾಸಂ'ರವರ ತಿರುಗಾಟದ ಉದ್ದೇಶವೂ ಕೂಡ ಇದೇ ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು.

ಉತ್ತಮ ನಾಟಕಗಳನ್ನು ನೋಡಲು ಅವಕಾಶ ಕಲ್ಪಿಸಿಕೊಟ್ಟ ಶೃಂಗೇರಿಯ ಜೂನಿಯರ್ ಛೇಂಬರ್ ಮತ್ತು ಜೆ. ಸಿ. ಬಿ. ಎಂ. ಕಾಲೇಜಿನ ಬೆಳ್ಳಿಹಬ್ಬದ ಸಮಿತಿಗಳವರು ಅಭಿನಂದನಾರ್ಹರು.

● 'ಶೃಂಗ', ಶೃಂಗೇರಿ

# ಹಳ್ಳಿಗಾಡಿನಲ್ಲೊಂದು ಉತ್ತಮ ಸಾಂಸ್ಕೃತಿಕ ಸಂಜೆ

ಹೇರೂರಿಗೆ ಸಮೀಪದ ದೂಬಳ ವೀರಗಲ್ಲುಮಕ್ಕಿ ಶಾಲೆಯ 'ಹಳೆ ವಿದ್ಯಾರ್ಥಿಗಳ ಸಂಘ'ವಾಗಿ ಈಗ್ಗೆ 4 ವರ್ಷದ ಹಿಂದೆ ಆರಂಭಗೊಂಡ 'ಹವಿಸಂ' ಬಳಗ ಇಂದು 'ಹವ್ಯಾಪಿ ವಿವಿಧ ವಿನೋದಾವಳಿ ಸಂಘ'ವಾಗಿ ಮಾರ್ಪಟ್ಟು ಒಂದು ಉತ್ತಮ ಸಾಂಸ್ಕೃತಿಕ ತಂಡವಾಗಿ ಬೆಳೆಯುತ್ತಿದೆ

ಪ್ರತಿ ವರ್ಷದಂತೆ ಈ ವರ್ಷವೂ ಈ ತಂಡ ಸ್ಥಳೀಯ ಕಿರಿಯ ಪ್ರಾಥಮಿಕ ಶಾಲಾ ವಾರ್ಷಿಕೋತ್ಸವದಂದು ನಡೆಸಿಕೊಟ್ಟ ವಿವಿಧ ಕಾರ್ಯಕ್ರಮಗಳು ಕಿಕ್ಕಿರಿದು ನೆರೆದಿದ್ದ ಸುತ್ತಮುತ್ತಲಿನ ರೈತಾಪಿ ಮತ್ತು ಕೃಷಿ ಕಾರ್ಮಿಕ ವರ್ಗದ ಪ್ರೇಕ್ಷಕರನ್ನು ಬೆಳಗಿನ ಜಾವ 3 ಗಂಟೆ ಮೀರಿದರೂ ಅಚಲನಾಗಿ ಕುಳಿತು ನೋಡುವಂತೆ ಸೆರೆ ಹಿಡಿದಿಟ್ಟಿದ್ದವು.

## ಭಾವೈಕ್ಯ

ಈ ತಂಡದ ಸೂತ್ರಧಾರನಂತಿರುವ (ಸೂತ್ರದ ದಾರವೂ ಎನ್ನಬಹುದು ?) ಹು ವಾ. ಶ್ರೀವತ್ಸ ಅವರು ರಚಿಸಿ ನಿರ್ದೇಶಿಸಿದ 'ಸಂಭವಾಮಿ ಯುಗೇ ಯುಗೇ' ರೂಪಕ ಭಾವೈಕ್ಯದ ಸಂದೇಶ ಬಿಂಬಿಸುವ ಒಂದು ಉತ್ತಮ ಪ್ರಯತ್ನ. ಲೋಕದಲ್ಲಿ ಅಧರ್ಮ, ಅನ್ಯಾಯ ಹೆಚ್ಚಿದಾಗಲೆಲ್ಲ ಸಜ್ಜನರ ನೆರವಿಗಾಗಿ ತಾನು ಯುಗ ಯುಗದಲ್ಲೂ ಜನ್ಮ ತಳೆಯುವುದಾಗಿ ಭಗವದ್ಗೀತೆಯ ಶ್ರೀ ಕೃಷ್ಣ ಹೇಳುವ ಮಾತನ್ನು, ಬೌದ್ಧ, ಜೈನ, ಯಹೂದಿ, ಕ್ರೈಸ್ತ, ಇಸ್ಲಾಂ ಮುಂತಾದ ಎಲ್ಲ ಮತ ಧರ್ಮ ಸಂಸ್ಥಾಪಕರುಗಳ ಹುಟ್ಟಿಗೂ ಅನ್ವಯಿಸಿ, ಎಲ್ಲ ಧರ್ಮಗಳ ತಿರುಳು ನ್ಯಾಯದ, ಧರ್ಮದ, ಪ್ರೀತಿಯ ಸಹಜೀವನವೇ ಎಂಬುದನ್ನು ಮನವರಿಕೆ ಮಾಡಿಕೊಡುವಲ್ಲಿ ಈ ರೂಪಕ ಯಶಸ್ವಿಯಾಗುತ್ತದೆ.

ತರಬೇತಿಯ ಕೊರತೆ, ಬೆಳಕು–ರಂಗಸಜ್ಜಿಕೆಗಳು ನಿರೀಕ್ಷಿತ ಮಟ್ಟಕ್ಕಿಲ್ಲದ್ದು ಈ ಪ್ರಯೋಗವನ್ನು ಸ್ವಲ್ಪ ದುರ್ಬಲಗೊಳಿಸಿದವು ಆದರೂ ಇನ್ನಷ್ಟು ಸುಧಾರಣೆ ಮತ್ತು ಒಂದೆರಡು ಮಾರ್ಪಾಟುಗಳಿಂದ ಇದನ್ನೊಂದು ಸ್ಮರಣೀಯ 'ಐಟಂ' ಆಗಿಸಬಹುದು.

## ಉತ್ತಮ ನಾಟಕ

ಎಲ್. ಎಸ್. ರಾವ್ ರಚಿತ 'ರಣದುಂದುಭಿ' ಐತಿಹಾಸಿಕ ನಾಟಕ ಸಾಕಷ್ಟು ಯಶಸ್ವಿಯಾಗಿ ಮೂಡಿ ಬಂತು. ಪೌರವ, ಅಲೆಗ್ಸಾಂಡರ್, ಚಾಣಕ್ಯ ಮತ್ತು ಅಂಬಿ– ಈ ನಾಲ್ಕು ಪ್ರಮುಖ ಪಾತ್ರಗಳ ಮೇಲೆಯೇ ಆಧರಿಸಿರುವ ಈ ನಾಟಕದಲ್ಲಿ ಸ್ಥಳೀಯ ಪ್ರತಿಭೆಗಳನ್ನು ಪುಟಕ್ಕಿಟ್ಟು ಅವುಗಳ ಪ್ರತಿಭೆ ಹೊಮ್ಮಿಸುವ ಅತಿ ಕಷ್ಟದ ಕಸರತ್ತಿನಲ್ಲಿ, ನಾಟಕ ನಿರ್ದೇಶಿಸಿದ ಎಲೆಮಡಲು ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಎಂ. ಎ. ಪದ್ಮನಾಭ ಅವರು ಬಹುಮಟ್ಟಿಗೆ ಯಶಸ್ವಿಯಾಗಿದ್ದಾರೆ. ಬಹುಶಃ ತರಬೇತಿಗೆ ಇನ್ನಷ್ಟು ಅವಕಾಶ ದೊರೆತಿದ್ದರೆ, ಹಾಗೂ ಒಂದೆರಡು ಪಾತ್ರಗಳ ಹಂಚಿಕೆಯಲ್ಲಿ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತಿದ್ದರೆ ಇದೊಂದು ಅತ್ಯುತ್ತಮ ಪ್ರಯೋಗವಾಗುತ್ತಿದ್ದುದರಲ್ಲಿ ಸಂಶಯವಿಲ್ಲ

ಅಲೆಕ್ಸಾಂಡರ್ ಪಾತ್ರದಲ್ಲಿ ಸುಕುಮಾರ್ ಹೆಗ್ಡೆ ಪಾತ್ರದ ಗಾಂಭೀರ್ಯಕ್ಕೆ ತಕ್ಕಂತೆ ಅತ್ಯುತ್ತಮ ಅಭಿನಯ ನೀಡಿದರು. ಪೌರವನ ಎಳೆಯ ಪ್ರಾಯದ ಪರಾಕ್ರಮಿ ಮಗ ವಿಕ್ರಮ ಸಿಂಹನಾಗಿ ಅಧ್ಯಾಪಕ ಶಂಕರಪ್ಪ ಅವರ ಅಭಿನಯವೂ ಕರಾರುವಾಕ್ ಆಗಿತ್ತು. ಒಂದು ಪ್ರಮುಖ ಸನ್ನಿವೇಶದಲ್ಲಿ ಸಂಭಾಷಣೆಯಗೊಂದಲ, ಒಂದೆರಡು ಕಡೆ ಅಭಿವ್ಯಕ್ತಿಯ ತುಸು ಕೊರತೆ ಬಿಟ್ಟರೆ, ಪೌರವನಾಗಿ ಶ್ರೀಧರ್ ಕೂಡ ಸಮರ್ಥ ಅಭಿನಯ ನೀಡಿದರು. ಆದರೆ ಅನಿರೀಕ್ಷಿತವಾಗಿ ತುಂಬ ಚೆನ್ನಾಗಿ ಮೂಡಿ ಬಂದ ಪಾತ್ರ ಸಿಕಂದರನ ಸಹಾಯಕ ಸೆಲ್ಯೂಕಸ್‌ನದು. ಇಡೀ ನಾಟಕದಲ್ಲಿ ಕೇವಲ ಎರಡೇ ಬಾರಿ ಚುಟುಕು ಸಂಭಾಷಣೆಯಿರುವ ಈ ಸೈನಿಕ ಪಾತ್ರಕ್ಕೆ ಚುರುಕಿನ ಖಡಕ್ ಅಭಿನಯದಿಂದ ಮೆರುಗು ಕೊಟ್ಟವರು ಸುಗಂಧರಾಜ ಹೆಗ್ಡೆ.

ಆದರೆ ನಾಟಕದ ಪ್ರತಿ ಹಂತಕ್ಕೂ ಕೇಂದ್ರಬಿಂದುವಾಗಿ, ನಾಟಕದ ಕ್ರಿಯೆಯನ್ನು ಮುಂದೊತ್ತಿಕೊಂಡೊಯ್ಯುವ ಚಾಲಕ ಶಕ್ತಿಯಾಗಿ ಮೂಡಬೇಕಿದ್ದ ಚಾಣಕ್ಯನ ಪಾತ್ರ ಸೊರಗಿತು (ವಸಂತ ಭಟ್). ಜೊತೆಗೇ ಅಂಬಿಯ ಪಾತ್ರದಲ್ಲಿ ಶ್ರೀವತ್ಸ ಅವರು ಕೂಡ ತಮ್ಮ ಸಾಮರ್ಥ್ಯದ ಪೂರ್ಣ ಎತ್ತರಕ್ಕೆ ಏರಲಿಲ್ಲ. ತಮ್ಮ ಸಂಭಾಷಣೆಗಳನ್ನು ಭಟ್ ತುಂಬಾ ಚೆನ್ನಾಗಿ ಕಲಿತಿದ್ದರಾದರೂ, ಅಭಿನಯದಲ್ಲಿ ಇನ್ನೂ ಪಳಗಬೇಕಿರುವ ಅವರ ಸದ್ಯದ ಅಭಿವ್ಯಕ್ತಿ ಸಾಮರ್ಥ್ಯಕ್ಕೆ ಚಾಣಕ್ಯನ ಪಾತ್ರ ಮೀರಿದ್ದಾಗಿಯೇ ಉಳಿಯಿತು. ಬಹುಶಃ ಇವೆರಡೂ ಪಾತ್ರಗಳನ್ನು ಅದಲು ಬದಲಾಗಿಸಿದ್ದರೆ ಇಡೀ ನಾಟಕದ ಯಶಸ್ಸಿನ ರಂಗೇ ಬೇರೆಯಾಗುತ್ತಿತ್ತೇನೋ.

(ನನ್ನ ಈ ಅಭಿಪ್ರಾಯವನ್ನೇ ನಿರ್ದೇಶಕರೂ ಸಹ ಒತ್ತಿ ಹೇಳಿದ್ದರೂ, ಚಾಣಕ್ಯನ ಪಾತ್ರವನ್ನು ಬಹಳ ಆಸೆಯಿಂದ ಆಯ್ದುಕೊಂಡಿದ್ದ ಭಟ್‌ರನ್ನು ನಿರಾಶೆಗೊಳಿಸಲು ತಂಡದವರಿಗೆ ಮನಸ್ಸಿಲ್ಲದೆ ಹೋಯಿತಂತೆ. ಆದರೆ ತನ್ನ ಪ್ರತಿಭೆಯನ್ನು ಹೊರ ಚೆಲ್ಲಬೇಕೆಂಬ ಆಸೆಯಿರುವವನಿಗೆ ಎಷ್ಟು ಚಿಕ್ಕದಾದ, ಪ್ರಾಮುಖ್ಯವಿಲ್ಲದ ಪಾತ್ರವಾದರೂ ಸಾಕು ಎಂಬುದಕ್ಕೆ ಸೆಲ್ಯೂಕಸ್ ಪಾತ್ರವೇ ಉದಾಹರಣೆ. ಪಾತ್ರ ಹಂಚಿಕೆಯಲ್ಲಿ ನಿರ್ದೇಶಕನದೇ ಅಂತಿಮ ತೀರ್ಮಾನವಾಗಿರಬೇಕು ಎಂಬುದಕ್ಕೂ ಇದು ಒಳ್ಳೆಯ ದೃಷ್ಟಾಂತ.)

## ಹಾಸ್ಯದ ಹೊನಲು

ಕಡೆಯದಾಗಿ ಅಭಿನಯಿಸಿದ ಬೇಲೂರು ಕೃಷ್ಣಮೂರ್ತಿಯವರ 'ಕುದುರೆ ಮೊಟ್ಟೆ' ಹಾಸ್ಯ ನಾಟಕ ಒಂದು ನಿಮಿಷವೂ ಪುರುಸೊತ್ತು ಕೊಡದಂತೆ ಪ್ರೇಕ್ಷಕರನ್ನು ನಕ್ಕು ನಗಿಸುವಲ್ಲಿ ನೂರಕ್ಕೆ ನೂರು ಯಶಸ್ವಿಯಾಯಿತು. ಎಲ್ಲೂ ಅತಿರೇಕಕ್ಕೆ ತಿರುಗದೆ, ಎಲ್ಲೂ ಕೊರತೆಯನ್ನೂ ತೋರಿಸದೆ, ಸ್ಥಳೀಯರಿಗೆ ಅತ್ಯಂತ ಅಗತ್ಯವಾದ ಪೂರ್ಣ ಪ್ರಮಾಣದ ಮನರಂಜನೆಯೊದಗಿಸಿದ ಈ ನಾಟಕದಲ್ಲಿ ಎಲ್ಲ ಪಾತ್ರಧಾರಿಗಳೂ ಒಬ್ಬರನ್ನೊಬ್ಬರು ಮೀರಿಸಿದರು. ತಬಲ ಕಲಾವಿದರೂ ಆದ ಸ್ಥಳೀಯ ವೈದ್ಯ ಡಾ|| ಜನಾರ್ದನ್ ಅತಿಥಿ ನಟರಾಗಿ ಪಾತ್ರವಹಿಸಿದರು.

ಈ ನಾಟಕಗಳಿಗೂ ಇನ್ನಿತರ ಕಾರ್ಯಕ್ರಮಗಳಿಗೂ ಹಿಮ್ಮೇಳ ಹಿತಮಿತವಾಗಿತ್ತು. ಆದರೆ ರಂಗ ಸಜ್ಜಿಕೆ ಮತ್ತು ಬೆಳಕಿನ ನಿರ್ವಹಣೆ ಏನೂ ಸಾಕಾಗಲಿಲ್ಲ.

ಈ ಎಲ್ಲ ಕಲಾವಿದರೂ ಪದ್ಮನಾಭ ಅವರಂಥ ಅನುಭವಿಗಳ ಕೈಲಿ ಇನ್ನೂ ಸ್ವಲ್ಪ ಪಳಗಿದರೆ ಅದ್ಭುತ ಸೃಷ್ಟಿಸಬಲ್ಲರೆಂಬುದರಲ್ಲಿ ಎರಡು ಮಾತಿಲ್ಲ.

## ಮಾದರಿ

"ಹ ವಿ ಸಂ.' ಕಾರ್ಯಕ್ರಮಕ್ಕೆ ಮೊದಲು ಶಾಲಾ ಮಕ್ಕಳಿಂದ ಮತ್ತು ಅಂಗನವಾಡಿ ಮಕ್ಕಳಿಂದ ಮನರಂಜನಾ ಕಾರ್ಯಕ್ರಮಗಳು ನಡೆದವು. ಅದಕ್ಕೆ ಮೊದಲು ಮಂಡಲ ಪ್ರಧಾನ ಕೆ. ಎಸ್. ರವೀಂದ್ರ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭಾ ಕಲಾಪಗಳೂ ಚುಟುಕಾಗಿದ್ದವು. ಉಪ ಪ್ರಧಾನ ಹಿರೇಗದ್ದೆ ದಯಾನಂದ ಮತ್ತು ಪದ್ಮನಾಭ ಅವರುಗಳು ಸಮಯೋಚಿತವಾಗಿ ಸಂಕ್ಷಿಪ್ತವಾಗಿ ಮಾತನಾಡಿದರು. ಆದರೆ, "ಒಂದು ಶಾಲೆಯ ಅಧ್ಯಾಪಕ ವೃಂದ ಮತ್ತು ಪೋಷಕ ವೃಂದ ಹೇಗಿರಬೇಕೆಂಬುದಕ್ಕೆ ಈ ಶಾಲೆ ಅತ್ಯುತ್ತಮ ಉದಾಹರಣೆ". ಎಂಬ (ಬಹಳ ಸತ್ಯವಾದ) ಒಂದೇ ಮಾತಿನ ಅಧ್ಯಕ್ಷ ಭಾಷಣ, ಶಾಲಾ ಮಕ್ಕಳ ಕಾರ್ಯಕ್ರಮದಲ್ಲಿ ಭಾಷಣಗಳು ಹೇಗಿರಬೇಕೆಂಬುದಕ್ಕೂ ಉತ್ತಮ ಉದಾಹರಣೆಯಾಗಿತ್ತು.

ಇಂಥ ಯಶಸ್ವಿ ಕಾರ್ಯಕ್ರಮಕ್ಕೆ ಹೆಗಲು ಕೊಟ್ಟ ಇಡೀ ಹಳ್ಳಿಯ ಎಲ್ಲ ಜನ ಅಭಿನಂದನಾರ್ಹರು.

—ಸಿರಿಮನೆ ನಾಗರಾಜ್

## ನಗೆ ಟಾನಿಕ್

### ವಿಚಿತ್ರ

ಅವನು : ಅಬ್ಬಾ, ಇದೆಂತಹ ವಿಚಿತ್ರ ! ಒಂದೇ ಬೋನಿನಲ್ಲಿ ಹುಲಿ ಹಾಗೂ ಕುರಿ. ಇದೊಂದು ವಿಶ್ವದ ಅದ್ಭುತವೇ ಸರಿ.

ಇವನು : ಈ ಅದ್ಭುತಕ್ಕಾಗಿ ಗಂಟೆಗೊಂದು ಕುರಿ ಒಳಕ್ಕೆ ಹೋಗುತ್ತವೆ!

### ನಗ್ನ ಕವಿ

ಗುಂಡ : ಸಾರ್, ನೀವೇ ಅಲ್ವಾ ನಗ್ನ ದೇಹದ ಮೇಲೆ ಕವನ ಬರೆಯೋದು?

ಕವಿ : ಇಲ್ಲ ನಾ ಬರೆಯೋದು ಪೇಪರ್ ಮೇಲೆ ಮಾತ್ರ.........

### ಪಶು ವೈದ್ಯ

ಡಾಕ್ಟರ್ : ಮೇಡಂ, ನಿಮ್ಮ ಮಗನ ಚಿಕಿತ್ಸೆಗೆ ಬೇರೆ ವೈದ್ಯರನ್ನು ಕರೆಸಿ. ನಾನು ಪಶು ವೈದ್ಯ.

ಆಕೆ: ಗೊತ್ತು ಡಾಕ್ಟರೆ, ನಮ್ಮ ಮಗನಿಗೆ ಬಂದಿರುವುದು ನಾಯಿ ಕೆಮ್ಮು. ಅದಕ್ಕೇ ನಿಮ್ಮನ್ನು ಕರೆದೆ.

### ಸಿನಿಮಾ

ಗೆಳೆಯ (?) [illegible]ಣದವ : ಸಿನಿಮಾದಲ್ಲಿ ಹುಲಿಗೇಕೆ ಹೆದರಿ ಓಡಿ ಹೊರ ಬಂದ್ರಿ?

ಹೇ[illegible]ಗ : ನನಗೇನೋ ಸಿನಿಮಾ ಅಂತ ಗೊತ್ತು. ಹುಲಿಗೆ ಗೊತ್ತಿರಬೇಕಲ್ಲ !

—ಬೈರೂಳ್ಳಿ ಮಂಜುನಾಥ ಉಡುಪ

ದುಗರ ಪುಟ

## ಬಡ ರೈತರ ಬಾಕಿ ವಸೂಲಿಗೆ ಕಂತು ಕೊಡಿ

ಯುರೆ,

ಕಳೆದ ಆಗಸ್ಟ್-ಸೆಪ್ಟೆಂಬರ್ ಬಿರುಗಾಳಿ ಲ್ಲಿ ಮಲೆನಾಡಿನ ಅಡಿಕೆ ಬೆಳೆಗಾರರು, ರಲ್ಲೂ ಸಣ್ಣ ರೈತರುಗಳು ಬಹಳ ಷ್ಟ-ನಷ್ಟ ಅನುಭವಿಸಿದ್ದೇವೆ. ಈ ಬಗ್ಗೆ ಹಸೀಲ್ದಾರ್ ಮುಂತಾದ ಅಧಿಕಾರಿಗಳಿಗೆ ಹಾರಕ್ಕಾಗಿ ಅರ್ಜಿಗಳನ್ನು ಸಲ್ಲಿಸಿದ್ದರೂ ರಾರೂ ಪರಿಶೀಲಿಸಿಲ್ಲ. ಪರಿಹಾರವೂ ರೆತಿಲ್ಲ.

ಅದರ ಬದಲು ಇದೀಗ ತಹಸೀಲ್ದಾರರು ದಾಯ ಬಾಕಿ ವಸೂಲಿಗೆಂದು ತಗಾದೆ, ಕ್ರಮ ವಗೈರೆ ಜರುಗಿಸುತ್ತಿದ್ದಾರೆ. ಲ್ಲದೆ, 8-9 ವರ್ಷಗಳ ಹಿಂದೆಯೇ ಭೂ ಧಾರಣೆ ಪ್ರಕರಣಗಳು ತೀರ್ಮಾನ ಗಿದ್ದು, ಆ ಬಗ್ಗೆ ಗೇಣಿದಾರರು ಸರ್ಕಾ ಕಟ್ಟಬೇಕಾದ ಬಾಕಿ ಬಗ್ಗೆ ಈವರೆ ಯಾವ ತಿಳುವಳಿಕೆಯನ್ನೂ ಕೊಡದೆ ಏಕಾಏಕಿ ಒಂದೇ ಕಂತಿನಲ್ಲಿ ಕಟ್ಟಲು ಒದೆ ಮಾಡಿ, ಮೇಲ್ಕಂಡಂತೆ ಕ್ರಮ ಗಿಸುತ್ತಿದ್ದಾರೆ.

ಆದ್ದರಿಂದ ಘನ ಸರ್ಕಾರದವರು ಈ ಪರಾಮರ್ಶಿಸಿ, ಕಂತು ಮೂಲಕ ಕಿ ವಸೂಲಿ ಮಾಡುವಂತೆ ಆದೇಶಿಸ ಕಾಗಿ ಪ್ರಾರ್ಥಿಸುತ್ತೇವೆ.

ಅಲ್ಲದೆ ಕಾಂಗ್ರೆಸ್‌ನವರೂ ಸಹ 10 ರ ರೂ. ಒಳಗಿನ ಕೃಷಿ ಸಾಲ ಮನ್ನಾ ಡುವುದಾಗಿ ನೀಡಿದ್ದ ಭರವಸೆಯನ್ನು ಕಲೇ ಈಡೇರಿಸಬೇಕಾಗಿಯೂ ಕೋರು ವೆ. —ನೊಂದು ಹಣ್ಣಾದ ರೈತರು,

ಹಾಲ್ಮುತ್ತೂರು.

(8 ಜನರ ಸಹಿಗಳಿವೆ)

## ದುಶ್ಚಟಗಳ ನಿವಾರಣೆಗೆ ಸಂಘಟಿತ ಯತ್ನ ರೂಪುಗೊಳ್ಳಲಿ

ಪ್ರಿಯರೆ,

ಮಾದಕ ವ್ಯಸನಿಗಳು, ಮದ್ಯಪಾನಿಗಳು, ಧೂಮಪಾನಿಗಳು ನಮ್ಮ ದೇಶದಲ್ಲಿ ಸಮಸ್ಯೆಗಳ ಸರಪಳಿಯನ್ನು ಸೃಷ್ಟಿಸುತ್ತಿದ್ದಾರೆ ಈ ಬಗ್ಗೆ ಗಂಭೀರ ಚಿಂತನೆ ಅಗತ್ಯ. ದೇಶದ ಯುವ ಜನರು, ಅಪ್ರಾಪ್ತ ವಯಸ್ಕರು ಸಹ ಈ ವ್ಯಸನಗಳಿಗೆ ಬಲಿಯಾಗುತ್ತಿರುವುದು ದುಃಖದಾಯಕ ಸಂಗತಿ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಈಗಾಗಲೇ ಇದರ ಕರಾಳತೆಯ ಅರಿವಾಗಿ; ಎಚ್ಚರ ಮೂಡುತ್ತಿದೆ. ಆದರೆ ನಮ್ಮ ದೇಶದ ಜನತೆ ಎಚ್ಚೆತ್ತುಕೊಳ್ಳುವುದು ಯಾವಾಗ?

ಸುನೀಲ್‌ದತ್. ಮಿಥುನ್ ಚಕ್ರವರ್ತಿ ಮುಂತಾದವರು ಈ ಬಗ್ಗೆ ಜನರಲ್ಲಿ ತಿಳುವಳಿಕೆಯನ್ನುಂಟು ಮಾಡಲು ರ‍್ಯಾಲಿ ಮುಂತಾದುವನ್ನು ಸಂಘಟಿಸುತ್ತಿದ್ದಾರೆ. ಕರ್ನಾಟಕದಲ್ಲಿ ಸಿರಿಗೆರೆಯ ತರಳಬಾಳು ಜಗದ್ಗುರುಗಳು ಮದ್ಯಪಾನದ ವಿರುದ್ಧ ಸಮರ ಸಾರಿ ಜನರಿಗೆ ಈ ಬಗ್ಗೆ ಎಚ್ಚರಿಕೆ, ತಿಳುವಳಿಕೆ ನೀಡುತ್ತಿದ್ದಾರೆ. ಕರ್ನಾಟಕ ಸರ್ಕಾರ ಕೂಡ ಹಂತ, ಹಂತವಾಗಿ ಪಾನ ನಿಷೇಧ ಜಾರಿ ಮಾಡಲು ಯೋಚಿಸುತ್ತಿದೆ ಎಂದು ಆಗಾಗ ಓದುತ್ತಿರುತ್ತೇವೆ.

ಈ ವಿಚಾರದಲ್ಲಿ ಜನರಲ್ಲಿ ತಿಳುವಳಿಕೆ ಮೂಡುವುದು ಅತಿ ಮುಖ್ಯವಾದ ಸಂಗತಿ. ಕೇವಲ ಕಾನೂನಿನಿಂದ ಜನರ ಮನಃ ಪರಿವರ್ತನೆ ಅಸಾಧ್ಯ. ಜನರಿಗೆ ಅದರ ಒಳಿತು ಕೆಡಕುಗಳ ಸಂಪೂರ್ಣ ಮಾಹಿತಿ ನೀಡಿ ಅವರೇ ಮನಃಪೂರ್ವಕವಾಗಿ ಅಂತಹ ಅಭ್ಯಾಸವನ್ನು ತ್ಯಜಿಸುವಂತೆ ಮಾಡಬೇಕು.

ಈ ಬಗ್ಗೆ ಕೊಪ್ಪದ ಸಂಘ-ಸಂಸ್ಥೆಗಳು, ವಿದ್ಯಾರ್ಥಿ ಯುವ ಜನರು, ನಾಗರೀಕರು ಸಂಘಟಿತರಾಗಿ ಮಾದಕ ದ್ರವ್ಯ ಸೇವನೆ, ಮದ್ಯಪಾನ, ಧೂಮಪಾನಗಳ ಬಗ್ಗೆ ತಿಳುವಳಿಕೆಯ ಕಾರ್ಯಕ್ರಮ ಹಮ್ಮಿಕೊಂಡು ಮುಂದಿನ ಭವ್ಯ ಭವಿಷ್ಯಕ್ಕೆ ಅಡಿಗಲ್ಲಾಗಿ ನಿಂತರೆ ಮಹದುಪಕಾರ. ಅದು ಕರ್ತವ್ಯ ಕೂಡ. ಯಾವುದೇ ಸಂಘಟನೆ ಮುಂದೆ ನಿಂತು ಈ ಕಾರ್ಯ ಕೈಗೆತ್ತಿಕೊಳ್ಳಲೆಂದು ಆಶಿಸುತ್ತೇನೆ.

—ನಂದ, ಕೊಪ್ಪ.

## ಹೆಚ್ಚುತ್ತಿರುವ ಚಂದಾ ವಸೂಲಿಗಳು....

ದಸರಾ ಹಬ್ಬದ ಸಾಲು ಕಳೆಯಿತೆಂದರೆ ಸಾಕು. ಕಟ್ಟಡ, ನಾಟಕ, ದೇವಸ್ಥಾನ-ಇತ್ಯಾದಿ ನಾನಾ ನೆಪಗಳಲ್ಲಿ ಎಲ್ಲೆಲ್ಲೂ ಸಂಭಾವನೆ, ಚಂದಾ ವಸೂಲಿ ಇತ್ಯಾದಿಗಳು ಶುರು. ಬಹು ದೂರದಿಂದಲೂ ದೇವಸ್ಥಾನಗಳ ವತಿಯಿಂದ ಚಂದಾ ರೂಪದಲ್ಲಿ ಅಡಿಕೆ ಸಂಭಾವನೆಗೆ ಬರ್ತಾರೆ. ಇತ್ತೀಚೆಗಂತೂ ಇದು ವಿಪರೀತವಾಗಿ ಬಿಟ್ಟಿದೆ.

ಈ ವರ್ಷದಂತಹ ದುರ್ಭರ ದಿನಗಳಲ್ಲೂ ಈ ಪೀಡಿಸುವಿಕೆ ತಗ್ಗಿಲ್ಲ. ಕೆಲವು ಕಡೆ ಕೂಲಿ ಮಾಡಿ ಜೀವಿಸುವವರಿಂದಲೂ ಬಲವಂತವಾಗಿ ವಸೂಲು ಮಾಡ್ತಾರೆ. ಅದರಲ್ಲೂ, ಸಾಮಾನ್ಯವಾಗಿ ಪ್ರತಿಷ್ಠಿತ ವ್ಯಕ್ತಿಗಳೇ ಬಂದಾಗ, ದಾಕ್ಷಿಣ್ಯಕ್ಕಾಗಿ ಹಣವಿಲ್ಲದಿದ್ರೂ ಬೇರೆಯವರಿಂದ ಕೈಗಡ ಪಡೆದಾದರೂ ಇವರಿಗೆ ಕೊಡಬೇಕಾದ ಅಸಹಾಯಕತೆ ನಮ್ಮ ಜನರಿಗೆ ಉಂಟಾಗುತ್ತದೆ.

ಊರಿನ ಯಾವುದೇ ಕಾರ್ಯಕ್ರಮಗಳಿಗೆ ಊರವರೆಲ್ಲರ ವಂತಿಗೆ, ಸಹಕಾರಗಳು ಬೇಕಾಗುತ್ತವೆ, ನಿಜ. ಹಾಗೆಯೇ, ನಮ್ಮಂಥ ಅಭಿವೃದ್ಧಿ ಶೀಲ ದೇಶದಲ್ಲಿ ವಿದ್ಯಾಭ್ಯಾಸ, ಗ್ರಾಮಾಭಿವೃದ್ಧಿ, ಆರೋಗ್ಯ ಮುಂತಾದುವುಗಳಿಗೂ ಸಾರ್ವಜನಿಕರ ಕೊಡುಗೆಯೇ ದೊಡ್ಡ ಸಂಪನ್ಮೂಲವಾಗಬೇಕಾಗಿದೆ. ಇದಕ್ಕೆಲ್ಲ ಕೊಡೋಣ. ಆದರೆ ಎಲ್ಲದಕ್ಕೂ ಒಂದು ಇತಿ-ಮಿತಿ ಬೇಕಲ್ಲವೆ? ಸುತ್ತಮುತ್ತಲವರು ಮಾತ್ರವಲ್ಲದೆ, ದೂರ ದೂರದವರೂ ಬಂದು ಪೀಡಿಸಿದರೆ ಜನರ ಜೀವನ ನಿರ್ವಹಣೆ ಹೇಗೆ ಆಗಬೇಕು?

(4ನೇ ಪುಟಕ್ಕೆ)

## ಬಾಳ್ಗಡಿ ಅಂಚೆ ಕಛೇರಿಗೆ ಬಟವಾಡೆ ಸೌಲಭ್ಯ ಬೇಕು

ಪ್ರಿಯರೆ,

ಕೊಪ್ಪದ ಬಹುತೇಕ ಎಲ್ಲ ತಾಲ್ಲೂಕು ಮಟ್ಟದ ಕಛೇರಿಗಳೂ ಇರುವುದು ಬಾಳಗಡಿಯಲ್ಲೇ. ಅಲ್ಲದೆ ಆಯುರ್ವೇದ ಕಾಲೇಜು, ಪ್ರಥಮ ದರ್ಜೆ ಕಾಲೇಜು, ಮಂಡಲ ಪಂಚಾಯ್ತಿಗಳೂ ಇಲ್ಲಿವೆ. ಆದರೆ ಇಲ್ಲಿರುವ ಉಪ ಅಂಚೆ ಕಛೇರಿಯಲ್ಲಿ ಅಂಚೆ ಪತ್ರಗಳ ಬಟವಾಡೆ ಸೌಕರ್ಯವಿಲ್ಲ.

ಇದರಿಂದ ಈ ಎಲ್ಲ ಕಛೇರಿಗಳಿಗೂ, ಸುತ್ತಮುತ್ತಲ ಹತ್ತಾರು ಹಳ್ಳಿಗಳಿಗೂ ಬಹಳ ತೊಂದರೆಯಾಗಿದೆ. ಯಾವುದೇ ಪತ್ರಕ್ಕೆ ತುರ್ತಾಗಿ, ಮರು ಟಪಾಲಿಗೆ ಉತ್ತರಿಸುವ ಅಗತ್ಯವಿದ್ದಲ್ಲಿ ಅದು ಇಲ್ಲಿ ಸಾಧ್ಯವಾಗುತ್ತಿಲ್ಲ. ಏಕೆಂದರೆ ಕೊಪ್ಪದ ಮುಖ್ಯ ಅಂಚೆ ಕಛೇರಿಯಿಂದ ಇಲ್ಲಿ ಪತ್ರಗಳು ವಿತರಣೆಯಾಗುವಾಗಲೇ ಮಧ್ಯಾಹ್ನವಾಗಿರುತ್ತದೆ. ಅಥವಾ ಸಂಬಂಧಪಟ್ಟವರು ಕೊಪ್ಪ ಅಂಚೆ ಕಛೇರಿಗೇ ಯಾರನ್ನಾದರೂ ಕಳಿಸಿ ಪತ್ರಗಳನ್ನು ಪಡೆಯಬೇಕಾಗಿದೆ. ಅದೂ ರಿಜಿಸ್ಟರ್ಡ್ ಮುಂತಾದುವಕ್ಕೆ ಸಾಧ್ಯವಿಲ್ಲ.

ಆದ್ದರಿಂದ ಅಂಚೆ ಮೇಲಧಿಕಾರಿಗಳು ಕೂಡಲೇ ಬಾಳಗಡಿ ಅಂಚೆ ಕಛೇರಿಯಲ್ಲಿ ಎಲ್ಲ ಬಗೆಯ ಅಂಚೆ ಪತ್ರಗಳ ಬಟವಾಡೆ ಸೌಲಭ್ಯ ಕಲ್ಪಿಸಬೇಕಾಗಿ ಅರಿಕೆ.

—ಬಿ. ಎಲ್. ಅಶೋಕರಾವ್,

ಬಾಳಗಡಿ.

## ...ಯರ್‌ಲೆಸ್ 'ರಾಷ್ಟ್ರೀಯ' ಸಂಸ್ಥೆಯೂ ಇತರ 'ಬ್ಲೇಡ್' ಸಂಸ್ಥೆಗಳೂ

ಯರೆ,

ದಿನಾಂಕ 25-3-1990ರ ನಿಮ್ಮ ಪತ್ರಿಕೆಯಲ್ಲಿ "ಮನಿ ಸರ್ಕ್ಯುಲೇಶನ್ : ಲಾಭ ಹಣಕ್ಕೊಂದು ಹೊಸ ಟೋಪಿ ..." ಎಂಬ ಬರಹದಲ್ಲಿ. "ಆದಿತ್ಯ ಫೈನಾನ್ಸ್ ಮತ್ತು ಪಿಯರ್‌ಲೆಸ್ ಸಂಸ್ಥೆಗಳಲ್ಲಿ ಹಣ ಹೂಡಿದವರೆಷ್ಟೋ" ಎಂದು ಬರೆದಿರುವಿರಿ. ಇದು ಸರಿಯೇ? ಎಂದೋ ... ಗಿ ಹೋದ 'ಬ್ಲೇಡ್' ಕಂಪೆನಿಗಳೊಂದಿಗೆ ಪಿಯರ್‌ಲೆಸ್‌ನಂತಹ ರಾಷ್ಟ್ರೀಯ ಸಂಸ್ಥೆಯ ಹೆಸರು ಸೇರಿಸಿರುವುದು ಸಾರ್ವಜನಿಕ ... ಸಂಶಯಕ್ಕೆ ಆಣೆ ಮಾಡಿದಂತಾಗಿದೆ.

... ಸಂಗತಿಯನ್ನು ತಿಳಿಸುವುದಾದಲ್ಲಿ, ...ರ್‌ಲೆಸ್ ಸಂಸ್ಥೆಯು ನಮ್ಮ ದೇಶದಲ್ಲಿ ...ರಲ್ಲಿ ಹುಟ್ಟಿದ ಮೊಟ್ಟ ಮೊದಲ ಸಂ... ರಿಸರ್ವ್ ಬ್ಯಾಂಕ್ ಆಫ್ ... ಹಾಗೂ ಯುನೈಟೆಡ್ ಬ್ಯಾಂಕ್ ... ಇವುಗಳ ಅಧೀನದಲ್ಲಿರು... ಸರ್ಟಿಫಿಕೇಟ್ ದಾರರಿಗೆ ಯಾವು... ಮಾನಕ್ಕೆ ಅವಕಾಶವಿಲ್ಲ ಮಾತ್ರವಲ್ಲದೆ ಎಂತಹ ಅನುಮಾನವಿದ್ದರೂ ನಿವಾರಣೆಯಾಗುವಂತೆ 1987ರಲ್ಲಿ ಭಾರತದ ಶ್ರೇಷ್ಠ ನ್ಯಾಯಾಲಯ, ಸಂಸ್ಥೆಯ ಪರವಾಗಿ ತೀರ್ಪು ನೀಡಿದೆ.

ಇಂದು ಪಿಯರ್‌ಲೆಸ್ ಸಂಸ್ಥೆಯ ಕೆಳಗೆ ಲಕ್ಷಾಂತರ ಉದ್ಯೋಗಿಗಳು ಸಮರ್ಥ ಸೇವೆ ಸಲ್ಲಿಸುತ್ತಿದ್ದು ಯಾವುದೇ ರೀತಿಯ ವಂಚನೆಗೆ ಅವಕಾಶವಿಲ್ಲ. ಹೆಚ್ಚಿನ ಕರಾರಿಲ್ಲದೆ ಸಾರ್ವಜನಿಕರಿಗೆ ಅತ್ಯಧಿಕ ಲಾಭ, ನಿರುದ್ಯೋಗಿಗಳಿಗೆ ಉದ್ಯೋಗ ಹಾಗೂ ಬಡ್ತಿ ಅವಕಾಶ ನೀಡುತ್ತಾ ಜನಪ್ರಿಯತೆಯ ಮೆಟ್ಟಿಲೇರುತ್ತಿದೆ

—ಕೆ ಎಸ್. ಮೂರ್ತಿ. ಎಫ್ ಒ.

ಮತ್ತು ಇತರರು. (6 ಸಹಿಗಳಿವೆ)

[ಸಂಪಾದಕರ ಟಿಪ್ಪಣಿ :

ರಾಷ್ಟ್ರೀಯ ಮಟ್ಟದಲ್ಲಿ ಐವತ್ತು ಸಾವಿರ -ಇಪ್ಪತ್ತು ಸಾವಿರ ಶಾಖೆಗಳುಳ್ಳಂಥವು, ಅಷ್ಟು ಹಳೆಯವು-ಇಷ್ಟು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವಂಥವು — ಮುಂತಾಗಿ ಕೊಚ್ಚಿಕೊಳ್ಳುತ್ತಿದ್ದ ಸುದರ್ಶನ್ ಚಿಟ್ ಫಂಡ್ಸ್, ಆದಿತ್ಯ ಫೈನಾನ್ಸ್ ಮುಂತಾದ ಎಷ್ಟೋ ಎಷ್ಟೋ ಖಾಸಗಿ ಸಂಸ್ಥೆಗಳೂ ಸಹ, ತಮಗೆ ಸಾಕೆನ್ನಿಸಿದಾಗ ಸರ್ಕಾರಕ್ಕೆ, ಬ್ಯಾಂಕುಗಳಿಗೆ, ಅಷ್ಟೇ ಏಕೆ ಭಾರತದ ಶ್ರೇಷ್ಠಾತಿಶ್ರೇಷ್ಠ ನ್ಯಾಯಾಲಯಗಳಿಗೂ

(4ನೇ ಪುಟಕ್ಕೆ)

## ಕಾಡಿನ ಬೆಂಕಿ ಅಪಘಾತಗಳು

ಪ್ರಿಯರೆ,

ನಮ್ಮ ಸುತ್ತ ಮುತ್ತಲ ಹಳ್ಳಿ ಕಾಡುಗಳಲ್ಲಿ ಡಿಸೆಂಬರ್ ತಿಂಗಳಿಂದ ಮೇ-ಜೂನ್ ತಿಂಗಳವರೆಗೆ ಸಾಮಾನ್ಯವಾಗಿ ಪ್ರತಿ ದಿನ ಬೆಂಕಿ ಬೀಳುತ್ತಿದ್ದು, ಇದರ ಕಷ್ಟ ನಷ್ಟಗಳನ್ನು ಅನುಭವಿಸುತ್ತಿದ್ದೇವೆ. ಇದಕ್ಕೆಲ್ಲಾ ನಮ್ಮ ಅತಿಯಾದ ಬೇಜವಾಬ್ದಾರಿಯೇ ಕಾರಣವಾಗಿದೆ.

ರಾತ್ರಿ ವೇಳೆಯಲ್ಲಿ ಅಡಿಗೆ ಹಾಗೂ ಸ್ನಾನದ ಮನೆಗಳ ಬೆಂಕಿ ಪೂರ್ಣವಾಗಿ ನಂದಿಸದಿರುವುದು, ಗದ್ದೆಗಳಲ್ಲಿ ಗೊಬ್ಬರಕ್ಕಾಗಿ ಹಾಕಿರುವ 'ಸುಡುಗಡಿ' ಬೆಂಕಿಯ ಬಗ್ಗೆ ಗಮನಹರಿಸದಿರುವುದು ಕೆಲವು ಕಾರಣಗಳು. ಅಲ್ಲದೆ ಶೇ. 22 ರಿಂದ 23 ರಷ್ಟು ಬೆಂಕಿ ಅಪಘಾತಗಳು ಬೀಡಿ-ಸಿಗರೇಟು ಸೇದುವವರ ಬೇಜವಾಬ್ದಾರಿಯಿಂದ ಆಗುತ್ತಿವೆ ಎಂದು ಅಗ್ನಿ ಶಾಮಕ ದಳದವರ ಅಂದಾಜು.

ಇಂತಹ ಬೆಂಕಿ ಅಪಘಾತಗಳ ಬಗ್ಗೆ ಪ್ರತಿಯೊಬ್ಬರೂ ಎಚ್ಚರ ವಹಿಸಿದರೆ ಸಂಭವಿಸಬಹುದಾದ ಕಷ್ಟ ನಷ್ಟ ತಪ್ಪುತ್ತದೆ. ಅಲ್ಲದೆ ಬೆಂಕಿ ತಾಗಿಸಿಕೊಂಡಂತಹ ... ವಲ್ಲಿ ಇತರ ಕಡೆಗೆ ಹರಡದಂತೆ ತಡೆಗಟ್ಟಲೂ ಯತ್ನಿಸಬೇಕು. ಬೆಂಕಿ ಅಪಘಾತಗಳ ಬಗ್ಗೆ ಮುಂಜಾಗ್ರತಾ ಕ್ರಮಗಳನ್ನು ಕುರಿತು ಸರ್ಕಾರದವರು ಸಿನಿಮಾ ಸ್ಲೈಡ್‌ಗಳ ಮೂಲಕ ತೋರಿಸಿದಲ್ಲಿ ಬಹಳಷ್ಟು ಉಪಯೋಗವಾಗಬಹುದು.

—ಬಾಣಾಕಿ ಪ್ರಕಾಶ್, ...ನಿಶೆಟ್ಟಿ.

## ಉಚಿತ ಮಣ್ಣು ಪರೀಕ್ಷೆ

ಬಾಳೆಗದ್ದೆ ಕೊಪ್ಪ: ರೈತರು ತಮ್ಮ ಜಮೀನಿನಲ್ಲಿರುವ ಪೋಷಕಾಂಶಗಳ ಕೊರತೆ ಅಥವಾ ಹೆಚ್ಚಳವನ್ನು ತಿಳಿದುಕೊಳ್ಳಲು ಉಚಿತವಾಗಿ ಮಣ್ಣು ಪರೀಕ್ಷೆ ಮಾಡಿಸಿಕೊಳ್ಳಲು ಸೌಕರ್ಯವಿದೆ. ಮಣ್ಣು ಪರೀಕ್ಷೆಗೆ ಇದೀಗ ಸಕಾಲವಾಗಿದ್ದು, ರೈತರು ಈ ಸೌಲಭ್ಯದ ಪ್ರಯೋಜನ ಪಡೆದುಕೊಳ್ಳಬೇಕೆಂದು ಅತ್ತಿಕೊಡಿಗೆ ಮಂಡಲ ಕೃಷಿ ಸಹಾಯಕ ವಿ.ಎಸ್. ಶಿವಮೂರ್ತಿ ಕೋರಿದ್ದಾರೆ.

## ರಾಷ್ಟ್ರೀಯ ಸಂಸ್ಥೆಗಳೂ......

(3ನೇ ಪುಟದಿಂದ)

ಚಳ್ಳೆ ಹಣ್ಣು ತಿನ್ನಿಸಿ, ಬಾಗಿಲು ಮುಚ್ಚಿ ಜನರಿಗೆ ಟೋಪಿ ಹಾಕಿವೆ. ನಿಮ್ಮ ಈ ಘನಂದಾರಿ ಖಾಸಗಿ ಸಂಸ್ಥೆ ಬಗೆಗೂ ನನ್ನ ಯಾವ ಸಂದೇಹಗಳೂ ನಿವಾರಣೆಯಾಗಿಲ್ಲ. ಈ ಬಗ್ಗೆ ಈಗಾಗಲೇ ಬೇಕಾದಷ್ಟು ಜನ ನನ್ನ ತಲೆ ತಿಂದೂ ಆಗಿದೆ. ಆದರೂ ಖಾಸಗಿ ಹಣಕಾಸು ಸಂಸ್ಥೆ ಖಾಸಗಿ ಸಂಸ್ಥೆಯೇ. ಅವೆಲ್ಲ ಆಗಲೇ ಮುಚ್ಚಿವೆ, ಇದು ಇನ್ನೂ ಇದೆ— ಇಷ್ಟೇ ನನಗೆ ಕಾಣುವ ವ್ಯತ್ಯಾಸ.

—ಸಂಪಾದಕ]

## ಹೆಚ್ಚುತ್ತಿರುವ ಚಂದಾ ವಸೂಲಿ

(3ನೇ ಪುಟದಿಂದ)

ಇನ್ನು, ನಾಡಿನ ಧರ್ಮ–ಸಂಸ್ಕೃತಿಗಳ ರಕ್ಷಣೆ, ಪೋಷಣೆಗೂ ಜನರ ಪ್ರೋತ್ಸಾಹ ಬೇಕು. ಆದರೆ ಅವೆಲ್ಲವೂ ಸರಳವಾಗಿಯೂ, ಹಿತಮಿತವಾಗಿಯೂ ಇದ್ದರೆ ಒಳ್ಳೆಯದಲ್ಲವೆ? ಒಂದಕ್ಕಿಂತ ಒಂದು ಅದ್ದೂರಿ, ಲಕ್ಷ–ಕೋಟಿ ಗಟ್ಟಲೆಯಂದೇ ಯೋಜನೆಗಳಾಗಬೇಕೆ? ಎಲ್ಲಕ್ಕೂ ಭವ್ಯ, ಸುಸಜ್ಜಿತ ಕಟ್ಟಡ, ಮಂದಿರಗಳೇ ಆಗಬೇಕೆ? ಇಂಥ ಒಂದೂ ಆಡಂಬರಗಳಿಲ್ಲದಿದ್ದ ಹಿಂದಿನ ಕಾಲದಲ್ಲಿ ಧರ್ಮ–ಸಂಸ್ಕೃತಿಗಳು ಈಗಿಗಿಂತ ನೂರು ಪಟ್ಟು ಉಚ್ಛ್ರಾಯ ಸ್ಥಿತಿಯಲ್ಲಿರಲಿಲ್ಲವೆ?

ಆದ್ದರಿಂದ ದಯವಿಟ್ಟು ಎಲ್ಲರೂ ಯೋಚಿಸೋಣ. ಹೆಚ್ಚೆಚ್ಚು ಜನ ನಾಳಿನ ತುತ್ತಿನ ಬಗ್ಗೆಯೇ ಯೋಚಿಸುವಂತಾಗುತ್ತಿರುವ ಇಂದಿನ ದಿನಗಳಲ್ಲಿ ಹೀಗೆ ದಿನನಿತ್ಯ ವಸೂಲಿಗಳ ಕಾಟ ಹೆಚ್ಚಾಗಿ, ಜನರ ಜೀವನ ಮತ್ತಷ್ಟು ದುರ್ಭರವಾಗದಿರಲಿ.

—ಸುರೇಶ, ಅರೆಹಳ್ಳ

# ಏಳನೆ ತರಗತಿ ಉತ್ತೀರ್ಣರಾದವರಿಗೆ ಹರಿಹರಪುರದಲ್ಲಿ ಉಚಿತ ಬೇಸಿಗೆ ಶಿಬಿರ

ಹರಿಹರಪುರ : ಮಕ್ಕಳ ವ್ಯಕ್ತಿತ್ವ ವಿಕಾಸ ಹಾಗೂ ಮುಖ್ಯವಾಗಿ ಪ್ರೌಢ ಶಾಲೆಯನ್ನು ಪ್ರವೇಶಿಸುವ ಮಕ್ಕಳನ್ನು ಪ್ರೌಢ ವಿದ್ಯಾಭ್ಯಾಸಕ್ಕೆ ಅಣಿಗೊಳಿಸುವ ಸಲುವಾಗಿ ಇಲ್ಲಿನ ರಾಷ್ಟ್ರೋತ್ಥಾನ ಬಳಗದವರು ತಾ|| 20–5–1990 ರಿಂದ 10 ದಿನಗಳ ಬೇಸಿಗೆ ಶಿಬಿರವೊಂದನ್ನೇರ್ಪಡಿಸಿದ್ದಾರೆ.

ಗಣಿತ, ವಿಜ್ಞಾನ, ಇಂಗ್ಲಿಷ್ ವಿಷಯಗಳ 'ಬ್ರಿಡ್ಜ್ ಕೋರ್ಸ್' (ಪ್ರೌಢ ವಿದ್ಯಾಭ್ಯಾಸದ ತರಬೇತಿ) ಜೊತೆಗೆ ಸುಂದರ ಕೈ ಬರಹ, ಸಾಮಾನ್ಯ ಜ್ಞಾನ, ರಸ ಪ್ರಶ್ನೆ, ಮುಂತಾದ ತರಬೇತಿ ಹಾಗೂ ಚಟುವಟಿಕೆಗಳನ್ನು ಈ ಶಿಬಿರದಲ್ಲಿ ಅಳವಡಿಸಲಾಗಿದೆ. ಶಿಬಿರವು ಹತ್ತು ದಿನಗಳಲ್ಲಿ ಬೆಳಗಿನ ಅವಧಿಯಲ್ಲಿ ಮಾತ್ರ ನಡೆಯುತ್ತದೆ.

ಆಸಕ್ತ ಪೋಷಕರು 2 ರೂ. ನೋಂದಣಿ ಶುಲ್ಕದೊಂದಿಗೆ ತಮ್ಮ ಮಕ್ಕಳ ಹೆಸರನ್ನು ಬಳಗದ ಸದಸ್ಯರುಗಳಲ್ಲಿ ಅಥವಾ ಮಾಧವ ಕಲ್ಕೂರ್, ಮ್ಯಾನೇಜರ್, ಸಿಂಡಿಕೇಟ್ ಬ್ಯಾಂಕ್, ಹರಿಹರಪುರ ಅಥವಾ ಬಿ ಎಲ್. ಸುಧಾಕರ್, ಮ್ಯಾನೇಜರ್ ಡಿ. ಸಿ. ಸಿ. ಬ್ಯಾಂಕ್, ಹರಿಹರಪುರ ಅಥವಾ ಜೆ.ಎಲ್. ನಟರಾಜ್ ವ್ಯಾಪಾರಿಗಳು — ಇವರಲ್ಲಿ ನೋಂದಾಯಿಸಬೇಕು. ಹರಿಹರಪುರ ಪರಿಸರದ ಮಕ್ಕಳು ಇದರ ಪ್ರಯೋಜನವನ್ನು ಹೆಚ್ಚಾಗಿ ಪಡೆದುಕೊಳ್ಳಬಹುದು

### ಯಶಸ್ವೀ ಉಪಾಹಾರ ವಿತರಣೆ

ಎಂದಿನಂತೆ ಈ ವರ್ಷವೂ ಕೂಡ ರಾಷ್ಟ್ರೋತ್ಥಾನ ಬಳಗದವರು ಇಲ್ಲಿನ ಪದವಿ ಪೂರ್ವ ಕಾಲೇಜಿನ ಎಸ್. ಎಸ್. ಎಲ್. ಸಿ. ಕೇಂದ್ರದ ವಿದ್ಯಾರ್ಥಿಗಳಿಗೆ 5 ದಿನಗಳು ಮಧ್ಯಾಹ್ನ ಉಪಾಹಾರವನ್ನು ಏರ್ಪಡಿಸಿದ್ದರು. ಕೊನೆಯ ದಿನ ಸಿಹಿಯನ್ನೂ ವಿತರಿಸಲಾಯಿತು.

(ವರದಿ : ಅನಿಲ್ ಕುಮಾರ್)

### ಸೇನೆಗೆ ಭರ್ತಿ

ವಿಭಾಗೀಯ ನೇಮಕಾತಿ ಕಛೇರಿ. ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯಿಂದ ಸೇನಾ ಪಡೆಯಲ್ಲಿ 'ಸಾಮಾನ್ಯ ಕರ್ತವ್ಯ ಸೈನಿಕರ' ಹಾಗೂ ಇತರೆ ತಾಂತ್ರಿಕ ವರ್ಗದ ಸೈನಿಕರ ಹುದ್ದೆಗೆ ನೇಮಕಾತಿ ಮಾಡುವ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸಿದ್ದಾರೆ.

ಈ ಹುದ್ದೆಗಳಿಗೆ ಅಭ್ಯರ್ಥಿಗಳು ಅನುಕ್ರಮವಾಗಿ 16 ರಿಂದ 21 ಮತ್ತು 16 ರಿಂದ 23 ವರ್ಷಗಳ ವಯೋಮಿತಿಯುಳ್ಳವರಾಗಿದ್ದು ಶೇ. 40 ರಷ್ಟು ಅಂಕಗಳನ್ನು ಗಳಿಸಿ ಮೆಟ್ರಿಕ್‌ನಲ್ಲಿ ಉತ್ತೀರ್ಣರಾಗಿರಬೇಕು.

ಅಭ್ಯರ್ಥಿಗಳು ತಮ್ಮ ವಿವರ ಹಾಗೂ ದಾಖಲಾತಿಗಳ ಪ್ರತಿಗಳೊಂದಿಗೆ ಅರ್ಜಿಯನ್ನು, ವಲಯ ನೇಮಕಾತಿ ಕಛೇರಿ, ಮಂಗಳೂರು ಅಥವಾ ಜಿಲ್ಲಾ ಉದ್ಯೋಗಾಧಿಕಾರಿಗಳ ಕಛೇರಿಗೆ ಸಲ್ಲಿಸಬಹುದಾಗಿದೆ. ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಉದ್ಯೋಗಾಧಿಕಾರಿಗಳಿಂದ ಪಡೆಯಬಹುದು.

# ಕೊಪ್ಪದಲ್ಲಿ ಕೆಸರುಗದ್ದೆ ಓಟದ ಸ್ಪರ್ಧೆ

ಕೊಪ್ಪ: ಇಲ್ಲಿನ ಸರ್ವೋದಯ ಯುವಕ ಸಂಘದ ಆಶ್ರಯದ 4ನೇ ರಾಜ್ಯ ಮಟ್ಟದ ಕೆಸರುಗದ್ದೆ ಓಟ, ಹಗ್ಗದಾಟದ ಸ್ಪರ್ಧೆಗಳು ಏ. 8ರಂದು ಚಿಟ್ಟೆಮಕ್ಕಿಯಲ್ಲಿ ನಡೆದವು.

ಶಾಸಕ ಶಾಮಣ್ಣ ಉದ್ಘಾಟಿಸಿದ ಈ ಕಾರ್ಯಕ್ರಮದಲ್ಲಿ ಸುಮಿತ್ರಮ್ಮ, ಡಿ.ಎಸ್. ವಿಶ್ವನಾಥ ಶೆಟ್ಟಿ ಮತ್ತು ಸಿ. ಪ್ರೇಮಾಶೆಟ್ಟಿ ಮುಖ್ಯ ಅತಿಥಿಗಳಾಗಿದ್ದರು.

ಎಚ್.ಜಿ. ಗೋವಿಂದಗೌಡರ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಶರತ್ ಡಿ. ಕಲ್ಲೆ ವಿಜೇತರಿಗೆ ಬಹುಮಾನಗಳನ್ನು ವಿತರಿಸಿದರು. ಬಿ ಡಿ ಒ ರಾಮಮೂರ್ತಿ ಮತ್ತು ಸ| ಯು| ಸೇವಾಧಿಕಾರಿ ಕ[illegible]ಾಕರ ಶೆಟ್ಟಿ ಮುಖ್ಯ ಅತಿಥಿಗಳಾಗಿದ್ದರು

[illegible]ಕರ ವಿಭಾಗದ ಓಟದಲ್ಲಿ ದ. ಕನ್ನಡದ ಸಿ. ಯೋಗೀಶ್ ಬಂಗಾಡಿ, ಚಿಕ್ಕಮಗಳೂರು ಜಿಲ್ಲೆಯ ಜಕ್ಕಣಕ್ಕಿಯ ಜೆ. ಬಿ. ವೆಂಕಟೇಶ್ ಮತ್ತು ಹಂತವಾನೆಯ ಎಚ್. ಪಿ ಸತೀಶ್ ಮೊದಲ 3 ಸ್ಥಾನಗಳನ್ನು ಗಳಿಸಿದರೆ, ಯುವತಿಯರ ವಿಭಾಗದಲ್ಲಿ ಎಲ್ಲ ಚಿಕ್ಕಮಗಳೂರು ಜಿಲ್ಲೆಯವರೇ ಆದ ಕುದ್ನಶಿಯ ಕೆ ಕೆ. ಲತಾ ಮತ್ತು ಕೆ.ಕೆ. ಶೋಭಾ 1 ಮತ್ತು 3ನೇ ಸ್ಥಾನವನ್ನೂ, ಜಕ್ಕಣಕ್ಕಿಯ ಜೆ. ಬಿ. ಅನ್ನಪೂರ್ಣ 2ನೇ ಸ್ಥಾನವನ್ನೂ ಗಳಿಸಿದರು.

ಹಗ್ಗ ಎಳೆದಾಟದಲ್ಲಿ ಬಂಡಿಗಡಿ ಯುವಕರ ತಂಡವೂ, ಕುದುರೆಗುಂಡಿ ಯುವತಿಯರ ತಂಡವೂ ಮೊದಲ ಸ್ಥಾನಗಳನ್ನು ಗಳಿಸಿದವು. (ವರದಿ: ಕೆ.ಎ. ರಾಜೇಂದ್ರ)

## 'ಊರಿನ ಮಾರಿ' ವಿಡಿಯೊ ನಾಟಕ ಪ್ರದರ್ಶನ

ಶೃಂಗೇರಿ : ಅನಿಲ್ ಕ್ರಿಯೇಶನ್ಸ್‌ರವರ ಖಾಸಗಿ ಪ್ರಸಾರದ ಪ್ರಾಯೋಗಿಕ ವಿಡಿಯೋ ನಾಟಕ 'ಊರಿನ ಮಾರಿ'ಯ ಸಾರ್ವಜನಿಕ ಪ್ರದರ್ಶನ ಏ 6ರಂದು ಇಲ್ಲಿ ನಡೆಯಿತು. ಇದರ ನಟರಾದ ಉಮೇಶ್ ಕಾಸರವಳ್ಳಿ, ಕಾಳಿಂಗ ನಾವಡ, ಚಿದಾನಂದ ಕಾಸರಗೋಡು ಮುಂತಾದವರು ಫಲ ಪ್ರದಾನ ಸಮಾರಂಭದಲ್ಲಿ ಭಾಗವಹಿಸಿದ್ದರು.

ಭಾಗ್ಯಶ್ರೀ ಮೋಟಾರ್ಸ್ ಮತ್ತು ರತ್ನಾಕರ ಹೆಗ್ಡೆ ಈ ನಾಟಕದ ಪ್ರಾಯೋಜಕರು.

### ಹೊಸ ಅಲೆ ನಾಟಕ 'ಅಂಬೆ'

ಇಲ್ಲಿನ 'ಕಲಾರಂಗ' ತಂಡದವರು 'ಅಂಬೆ' ಎಂಬ ಹೊಸ ಅಲೆ ನಾಟಕದ ಕ್ಯಾಸೆಟ್ಟನ್ನು ಧ್ವನಿ ಮುದ್ರಿಸಿದ್ದು, ಸದ್ಯದಲ್ಲಿ ಬಿಡುಗಡೆಯಾಗಲಿದೆ. ಮಮತಾ, ಕೆ. ಜಿ. ರವಿಕುಮಾರ್, ಶಿವಶಂಕರ್, ಕೃಷ್ಣಮೂರ್ತಿ ಮುಂತಾದವರು ಇದಕ್ಕೆ ಧ್ವನಿ ನೀಡಿದ್ದಾರೆ.

ರಮೇಶ್ ಬೇಗಾರ್ ಈ ಎರಡೂ ನಾಟಕಗಳ ನಿರ್ದೇಶಕರು.

# ಗೃಹ ವೈದ್ಯ ಶಿಕ್ಷಣ ಶಿಬಿರ

ಮಲ್ಲಾಡಿಹಳ್ಳಿಯ ಅನಾಥ ಸೇವಾಶ್ರಮದಲ್ಲಿ ಆಯುರ್ವೇದ ಮತ್ತು ಯೋಗ ತಜ್ಞರಾದ ರಾಘವೇಂದ್ರ ಸ್ವಾಮಿಗಳ ಮಾರ್ಗದರ್ಶನದಲ್ಲಿ ಗೃಹವೈದ್ಯ ಶಿಕ್ಷಣ ಶಿಬಿರ 4-5-90ರಿಂದ 13-5-90ರವರೆಗೆ ಏರ್ಪಟ್ಟಿದೆ.

ಶಿಕ್ಷಣ ಮತ್ತು ವಸತಿ ಉಚಿತ. ಊಟದ ವ್ಯವಸ್ಥೆಗಾಗಿ 120 ರೂ. ಶುಲ್ಕದೊಂದಿಗೆ 1-5-90ರೊಳಗಾಗಿ ಆಸಕ್ತರು ತಮ್ಮ ಹೆಸರನ್ನು ನೊಂದಾಯಿಸಬೇಕು. ಅಭ್ಯರ್ಥಿಗಳು ಎಸ್ಸೆಸ್ಸೆಲ್ಸಿವರೆಗೆ ವ್ಯಾಸಂಗ ಮಾಡಿದ್ದು, 24ರಿಂದ 70ರೊಳಗಿನ ವಯಸ್ಸಿನವರಾಗಿರಬೇಕು. ಮಹಿಳೆಯರಿಗೂ ಪ್ರವೇಶವಿದೆ.

ಹೆಚ್ಚಿನ ವಿವರಗಳಿಗೆ, ಸ್ವವಿಳಾಸದ ಅಂಚೆ ಲಕೋಟೆಯೊಂದಿಗೆ, ಕಾರ್ಯದರ್ಶಿ, ಅನಾಥ ಸೇವಾಶ್ರಮ ವಿಶ್ವಸ್ತ ಸಮಿತಿ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ—ಇವರಿಗೆ ಬರೆಯಬಹುದು.

### ಅಡಿಕೆ ಧಾರಣೆ

ಶಿವಮೊಗ್ಗ : 12-4-1990

ಸರಕು : 2801–3251,

ಬೆಟ್ಟೆ : 2102–2512

ಗೊರಬಲು : 1275–1552

ಸಾಗರ : 12.4.1990

ಇಡಿ : 2280–2406

ಚಾಲಿ : 1989–2176

ಅಪಿ : 3219–3505

ಸಿಪ್ಪೆ ಗೋಟು : 968-1137



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ಧೀವಟಿಗೆ ಅಚ್ಚುಕೂಟ, ಕೊಪ್ಪ